

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1560 |
| ಸದಸ್ಯರ ಹೆಸರು | : | ಶ್ರೀ ಬಿ.ಜಿ.ಪಾಟೀಲ್ |
| ಉತ್ತರಿಸುವ ದಿನಾಂಕ | : | 24.09.2021 |
| ಉತ್ತರಿಸುವ ಸಚಿವರು | : | ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್, ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿರುವ ತಳವಾರ, ಪರಿವಾರ ಸಮುದಾಯಗಳಿಗೆ ಎಸ್.ಟಿ. (ಪರಿಶಿಷ್ಟ ಪಂಗಡ) ಪ್ರಮಾಣ ಪತ್ರ ಸಿಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br><br>ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿರುವ ಪರಿವಾರ ಹಾಗೂ ತಳವಾರ ಜಾತಿಗೆ ಸೇರಿದವರು ಪರಿಶಿಷ್ಟ ಪಂಗಡದ ಜಾತಿ ಪ್ರಮಾಣ ಪತ್ರ ಪಡೆಯಲು ಅರ್ಹರಿರುವುದಿಲ್ಲ. |
| ಆ) | ತಳವಾರ, ಪರಿವಾರ ಸಮುದಾಯದ ಜನರಿಗೆ ತಾಂತ್ರಿಕವಾಗಿ ಎಸ್.ಟಿ. ಪ್ರಮಾಣ ಪತ್ರ ಸಿಗದಿರಲು ಕಾರಣವೇನು; (ವಿವರ ನೀಡುವುದು) | ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರುವ Naikda, Nayaka ಜಾತಿಗಳ ಪರ್ಯಾಯ ಪದಗಳಾದ ಪರಿವಾರ ಹಾಗೂ ತಳವಾರ ಜಾತಿಗೆ ಸೇರಿದ ಅರ್ಹ ಅರ್ಜಿದಾರರು ಬೀದರ್, ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳನ್ನೊಳಗೊಂಡಂತೆ ರಾಜ್ಯದ್ಯಂತ ಪರಿಶಿಷ್ಟ ಪಂಗಡದ ಜಾತಿ ಪ್ರಮಾಣ ಪತ್ರ ಪಡೆಯುತ್ತಿದ್ದಾರೆ. |
| ಇ) | ಸದರಿ ಸಮುದಾಯದವರಿಗೆ ಎಸ್.ಟಿ. ಪ್ರಮಾಣ ಪತ್ರ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | Naikda, Nayaka ಜಾತಿಗಳ ಸಮನಾಂತರ ಪದಗಳಾಗಿ ಪರಿವಾರ ಮತ್ತು ತಳವಾರ ಜಾತಿಗಳನ್ನು ಕರ್ನಾಟಕ ರಾಜ್ಯದ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರ್ಪಡೆ ಮಾಡಿ ಭಾರತ ಸರ್ಕಾರವು ದಿನಾಂಕ:19.03.2020ರಂದು ಗೆಜೆಟ್ ನೋಟಿಫಿಕೇಶನ್ ನ್ನು ಹೊರಡಿಸಿರುತ್ತದೆ.<br><br>ನಾಯಕ ಸಮುದಾಯದ ಪರ್ಯಾಯ ಪದವಾದ ಪರಿವಾರ ಮತ್ತು ತಳವಾರ ಜಾತಿಗಳು ಮಾತ್ರ ಪರಿಶಿಷ್ಟ ಪಂಗಡದ ಜಾತಿ ಪ್ರಮಾಣ ಪತ್ರವನ್ನು ಪಡೆಯಲು ಅರ್ಹರಿರುತ್ತಾರೆ. ಪರಿವಾರ ಮತ್ತು ತಳವಾರ ಜಾತಿಗಳಿಗೆ ಪರಿಶಿಷ್ಟ ಪಂಗಡದ ಜಾತಿ ಪ್ರಮಾಣ ಪತ್ರವನ್ನು ವಿತರಿಸುವುದಕ್ಕೆ ಸಂಬಂಧಿಸಿದಂತೆ, ಅಟಲ್ ಜೀ ಜನಸ್ನೇಹಿ ತಂತ್ರಾಂಶದಲ್ಲಿ ಈಗಾಗಲೇ ಅಳವಡಿಸಿಕೊಳ್ಳಲಾಗಿದ್ದು, ಅದರಂತೆ ಜಾತಿ ಪ್ರಮಾಣ ಪತ್ರವನ್ನು ವಿತರಿಸುವ |

| | | |
|---|---|---|
| | | ಪ್ರಾಧಿಕಾರವಾದ ತಹಶೀಲ್ದಾರರು ಸದರಿ ಜಾತಿಗಳಿಗೆ ಪರಿಶಿಷ್ಟ ಪಂಗಡದ ಜಾತಿ ಪ್ರಮಾಣ ಪತ್ರವನ್ನು ವಿತರಿಸುತ್ತಿದ್ದಾರೆ. |

ಸಕಇ 231 ಎಸ್‌ಎಡಿ 2021

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು.